## ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1564
2) ಸದಸ್ಯರ ಹೆಸರು : ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3) ಉತ್ತರಿಸುವ ದಿನಾಂಕ: : 18-03-2021
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಸ್ತುತ ಕೇಂದ್ರ ಸರ್ಕಾರದಿಂದ ರಾಜ್ಯಕ್ಕೆ ಬರಬೇಕಾಗಿರುವ GST ಪರಿಹಾರ ಮೊತ್ತವೆಷ್ಟು: | ಪ್ರಸ್ತುತ ಕೇಂದ್ರ ಸರ್ಕಾರದಿಂದ ರಾಜ್ಯಕ್ಕೆ ಬರಬೇಕಾಗಿರುವ GST ಪರಿಹಾರ ಮೊತ್ತ: ರೂ.11356 ಕೋಟಿ |
| ಆ) | ಸರಕು ಮತ್ತು ಸೇವಾ ತೆರಿಗೆ (GST) ನಷ್ಟ ಪರಿಹಾರದ ಅಲಭ್ಯತೆಯಿಂದಾಗಿ ಉಂಟಾಗಿರುವ ಆದಾಯ ಕೊರತೆ ಎಷ್ಟು | **ಜನವರಿ–2021ರ ಅಂತ್ಯಕ್ಕೆ**<br>i. ಕ್ಲೇಮು ಮಾಡಿದ ಮೊತ್ತ: ರೂ.27292 ಕೋಟಿ<br>ii. ಸ್ವೀಕರಿಸಿದ ಮೊತ್ತ: ರೂ.15936 ಕೋಟಿ<br>(ನಷ್ಟ ಪರಿಹಾರ ರೂ.3553 ಕೋಟಿ ಮತ್ತು ನಷ್ಟ ಪರಿಹಾರ ಸಾಲ ರೂ.12383 ಕೋಟಿ)<br>iii. ಬಾಕಿ ಇರುವ ಮೊತ್ತ: ರೂ.11356 ಕೋಟಿ |
| ಇ) | GST ಸೆಸ್ ಹಾಗೂ ವಿಶೇಷ ರೂಪದ ಸಾಲ ಪಡೆಯುವ ಬಗ್ಗೆ ಸರ್ಕಾರ ಯಾವ ವಿಧಾನವನ್ನು ಆಯ್ಕೆ ಮಾಡಿಕೊಂಡಿದೆ; ಇದರಲ್ಲಿ ಎಷ್ಟು ಸಾಲ ಪಡೆಯುವ ಉದ್ದೇಶ ಹೊಂದಿದೆ; ಇದಕ್ಕೆ ಪಾವತಿಸಬೇಕಾದ ಬಡ್ಡಿದರ ಎಷ್ಟು; ಇದರಿಂದ ಬಂದ ಹಣವನ್ನು ಸರ್ಕಾರ ಯಾವ ಉದ್ದೇಶಕ್ಕೆ ಬಳಸಿಕೊಳ್ಳಲು ತೀರ್ಮಾನಿಸಲಾಗಿದೆ ಹಾಗೂ ಇದರಿಂದ ಆಗುವ ಅನುಕೂಲಗಳೇನು; | ಕೇಂದ್ರ ಸರ್ಕಾರವು 2 ಆಯ್ಕೆಗಳನ್ನು ನೀಡಿದ್ದು, ರಾಜ್ಯ ಸರ್ಕಾರವು ಆಯ್ಕೆ – 1ನ್ನು ಆಯ್ದುಕೊಂಡಿರುತ್ತದೆ. ಈ ಆಯ್ಕೆಯ ಅನುಸಾರ ಕೇಂದ್ರ ಸರ್ಕಾರವು ಸಾಲವನ್ನು ಪಡೆದು Special Window ಮುಖಾಂತರ ರಾಜ್ಯಕ್ಕೆ ಒಟ್ಟು – 12,407 ಕೋಟಿ ರೂ ಗಳನ್ನು ನೀಡುತ್ತಿದೆ. ಈ ಸಾಲದ ಮೇಲಿನ ಅಸಲು ಮತ್ತು ಬಡ್ಡಿಯ ಮರುಪಾವತಿಯ ಹೊರೆಯು ರಾಜ್ಯಗಳ ಮೇಲಿರದೇ ಸಂಗ್ರಹವಾಗುವ ಸೆಸ್ ಮೊತ್ತದಿಂದ ಪಾವತಿಸಲಾಗುವುದು. ಕೇಂದ್ರ ಸರ್ಕಾರದಿಂದ ಬಂದ ಹಣವನ್ನು ರಾಜ್ಯದ ವಿವಿಧ ಯೋಜನೆ / ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಖರ್ಚು ಮಾಡಲಾಗುವುದು. |
| ಈ) | ಸಾಲ ಪಡೆದಲ್ಲಿ ಈ ಸಾಲದ ಮೇಲಿನ ಬಡ್ಡಿಯನ್ನು ಸರ್ಕಾರ ತನ್ನ ಯಾವ ಸಂಪನ್ಮೂಲದಿಂದ ಪಾವತಿಸಬೇಕಾಗುತ್ತದೆ ತಿಳಿಸುವುದು | ಜಿ.ಎಸ್.ಟಿ. ಸಾಲದ ಮೇಲಿನ ಹೊಣೆಗಾರಿಕೆಯು ರಾಜ್ಯದ ಮೇಲಿರುವುದಿಲ್ಲ. ಈ ಸಾಲದ ಮೇಲಿನ ಅಸಲು ಮತ್ತು ಬಡ್ಡಿಯ ಮರುಪಾವತಿಯನ್ನು ಜಿ.ಎಸ್.ಟಿ. ಸೆಸ್ ಸಂಗ್ರಹಣೆಯ ಮೂಲಕ ಕೇಂದ್ರ ಸರ್ಕಾರವೇ ಭರಿಸಲಿದೆ. |

....2

| | | |
|---|---|---|
| ಉ) | ರಾಜ್ಯ ಸರ್ಕಾರದ ಋಣಭಾರ ಎಷ್ಟು ಲಕ್ಷ ಕೋಟಿಗೆ ಏರಿಕೆಯಾಗಲಿದೆ? ಈಗ ಹಾಲಿ ಇರುವ ಋಣಭಾರ ಎಷ್ಟು? | ರಾಜ್ಯ ಸರ್ಕಾರದ ಒಟ್ಟು ಋಣಭಾರ ದಿನಾಂಕ 01.04.2020 ರಲ್ಲಿ ರೂ.337520 ಕೋಟಿ ಇದ್ದು, ದಿನಾಂಕ 31.03.2021ಕ್ಕೆ ರೂ.398219 ಕೋಟಿ ಎಂದು ಅಂದಾಜಿಸಲಾಗಿದೆ. |

ಸಂಖ್ಯೆ: ಆಇ 36 ಸಿಎಸ್ಎಲ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ